## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನಿ(ಉ) ವಲಯ/ಬಿಜೆಪಿ/ಎಇ–1/2010–11/5588 ದಿನಾಂಕ: 12–10–2010.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ: 28–10–2010ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಬೆಳಗಾವಿ ಜಿಲ್ಲೆಯ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕಾಮಗಾರಿ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಆಡಳಿತಾತ್ಮಕ ಅನುಮೋದನೆ ನೀಡಿದ ಮೊತ್ತ ಹಾಗೂ ತಾಂತ್ರಿಕ ಮಂಜೂರಾತಿಯ ನೋಂದಣಿ ಸಂಖ್ಯೆ |
|---|---|---|---|
| ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಮುದೇನೂರ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 49.98 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 49.98 ಲಕ್ಷ ಸಂಖ್ಯೆ: 45/06–10 |
| ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ತೋರಣಗಟ್ಟಿ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 49.98 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 49.98 ಲಕ್ಷ ಸಂಖ್ಯೆ: 27/06–10 |
| ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 29.98 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 29.98 ಲಕ್ಷ ಸಂಖ್ಯೆ: 46/06–10 |
| ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಹುಲಕುಂದಾ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 17.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 17.00 ಲಕ್ಷ ಸಂಖ್ಯೆ: 32/06–10 |
| ಒಟ್ಟು | 146.94 | | |

ಈ ಕಾಮಗಾರಿಗಳನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಎರಡನೇ ಬಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 13–9–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 13–9–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 17–9–2010 |

ದಿನಾಂಕ 24–9–2010ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಇಬ್ಬರು ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು ದಿನಾಂಕ: 1–10–2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,15,24,415/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,13,15,411/– |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಶ್ರೀ ಬಿ.ಆರ್. ಕುದರಿ, ಪ್ರಥಮ ದರ್ಜೆ ಗುತ್ತಿಗೆದಾರರು | 1,20,48,648/– | 4.55 ಹೆಚ್ಚು | 6.48 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಆರ್. ಕುದರಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.48 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14–10–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,13,15,411/– ಗಳ ಮೇಲೆ ಶೇ. 6.48 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,20,48,648/– ಗಳಿಗೆ ಕಾಮಗಾರಿಯನ್ನು ಶ್ರೀ ಬಿ.ಆರ್. ಕುದರಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 73 ಕೆಜಿದು 2010, ಬೆಂಗಳೂರು, ದಿನಾಂಕ : 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ ಪ್ಯಾಕೇಜ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,13,15,411/–ಗಳ ಮೇಲೆ ಶೇ. 6.48 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,20,48,648/– ಗಳಿಗೆ (ರೂ. ಒಂದು ಕೋಟಿ ಇಪ್ಪತ್ತು ಲಕ್ಷ ನಲವತ್ತೆಂಟು ಸಾವಿರದ ಆರು ನೂರ ನಲವತ್ತೆಂಟು) ಕಾಮಗಾರಿಯನ್ನು ಶ್ರೀ ಬಿ.ಆರ್. ಕುದರಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ. ಆರ್. 2723

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆಯ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ (ಪ್ಯಾಕೇಜ್–8) ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರ ಪತ್ರದ ಸಂಖ್ಯೆ: ಮುಇಂ/ಸನಿ(ಉ) ವಲಯ/ಬಿಜೆಪಿ/ಎಇ–3/2010–11/5604 ದಿನಾಂಕ: 12–10–2010.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ: 28–10–2010ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/3112.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಹಾವೇರಿ ಜಿಲ್ಲೆಯ ಕೆಳಕಂಡ ಕಾಮಗಾರಿಗಳು ಸೇರಿದ್ದು, ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಅನುಮೋದಿಸಿದ ಮೊತ್ತ ಹಾಗೂ ತಾಂತ್ರಿಕ ಮಂಜೂರಾತಿಯ ನೋಂದಣಿ ಸಂಖ್ಯೆ |
|---|---|---|---|---|
| 1 | ಶಿಗ್ಗಾಂವ ತಾಲ್ಲೂಕಿನ ಅಂದಲಗಿ ಕೆರೆ ಸ.ನಂ. 139 ಅಭಿವೃದ್ಧಿ | 49.00 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 25.00 ಲಕ್ಷ ಸಂಖ್ಯೆ: 76/09–10 |
| 2 | ಶಿಗ್ಗಾಂವ ತಾಲ್ಲೂಕಿನ ಅಂದಲಗಿ ಕೆರೆ ಸ.ನಂ. 16 ಅಭಿವೃದ್ಧಿ | 29.50 | ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 29.50 ಲಕ್ಷ ಸಂಖ್ಯೆ: 77/09–10 |

| | | | | |
|---|---|---|---|---|
| 3 | ಶಿಗ್ಗಾಂವ ತಾಲ್ಲೂಕಿನ ಅಂದಲಗಿ ಕೆರೆ ಸ.ನಂ. 215 ಅಭಿವೃದ್ಧಿ | 29.50 | ಅಧೀಕ್ಷಕ ಇಂಜಿಯರ್, ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 29.50 ಲಕ್ಷ ಸಂಖ್ಯೆ : 84/09–10 |
| 4 | ಶಿಗ್ಗಾಂವ ತಾಲ್ಲೂಕಿನ ಅಂದಲಗಿ ಕೆರೆ ಸ.ನಂ. 184 ಅಭಿವೃದ್ಧಿ | 29.50 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 29.50 ಲಕ್ಷ ಸಂಖ್ಯೆ : 89/09–10 |
| 5 | ಶಿಗ್ಗಾಂವ ತಾಲ್ಲೂಕಿನ ಶೆಡಗರವಳ್ಳಿ | 29.00 | ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಬೆಳಗಾವಿ | ರೂ. 29.00 ಲಕ್ಷ ಸಂಖ್ಯೆ : 80/09–10 |
| | ಒಟ್ಟು | 166.50 | | |

ಈ ಕಾಮಗಾರಿಗಳನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 28–8–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 28–8–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 30–8–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 30–8–2010 |

ದಿನಾಂಕ 17–9–2010ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ ಇಬ್ಬರು ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 30–9–2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,06,32,783/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,03,35,204/– |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಶ್ರೀಕೆ. ಸುಬ್ಬಾರೆಡ್ಡಿ, ಪ್ರಥಮ ದರ್ಜೆ ಗುತ್ತಿಗೆದಾರರು | 1,15,44,913/– | 8.50 ಹೆಚ್ಚು | 11.70 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ. ಸುಬ್ಬಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.70 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14–10–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,03,35,204/– ಗಳ ಮೇಲೆ ಶೇಕಡ 11.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,15,23,752/– ಗಳಿಗೆ ಕಾಮಗಾರಿಯನ್ನು ಶ್ರೀ ಕೆ. ಸುಬ್ಬಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 73 ಕೆಜಿದು 2010, ಬೆಂಗಳೂರು, ದಿನಾಂಕ : 30ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯ ಆರ್.ಆರ್.ಆರ್. ಯೋಜನೆಯಡಿಯ ಕಾಮಗಾರಿಗಳ (ಪ್ಯಾಕೇಜ್–8) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,03,35,204/–ಗಳ ಮೇಲೆ ಶೇ. 11.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,15,23,752/– ಗಳಿಗೆ (ರೂ. ಒಂದು ಕೋಟಿ ಹದಿನೈದು ಲಕ್ಷ ಇಪ್ಪತ್ತಮೂರು ಸಾವಿರದ ಏಳು ನೂರ ಐವತ್ತೆರಡು) ಕಾಮಗಾರಿಯನ್ನು ಶ್ರೀ ಕೆ. ಸುಬ್ಬಾರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ. ಆರ್. 2724

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರನ್ನು ನಾಮನಿರ್ದೇಶನ ಮಾಡುವ ಕುರಿತು.

**ಓದಲಾಗಿದೆ :**

1. ದಿನಾಂಕ : 26–02–2007ರ ಅಧಿಸೂಚನೆ ಸಂಖ್ಯೆ : ಮಮಇ/3/ಮಭಾಬ/2007.
2. ದಿನಾಂಕ : 11–03–2010ರ ಆದೇಶ ಸಂಖ್ಯೆ : ಮಮಇ/07/ಮಭಾಬ/2010.
3. ದಿನಾಂಕ : 06–05–2010ರ ಆದೇಶ ಸಂಖ್ಯೆ : ಮಮಇ 255 ಮಭಾಬ 2008.
4. ದಿನಾಂಕ : 01–10–2010ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಸಂಖ್ಯೆ : ಮಮಅಇ/ಪಿಡಿಎಂ/59/2010–11 ದಿನಾಂಕ : 1–10–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಅಧಿಸೂಚನೆಯಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006, ಸೆಕ್ಷನ್ 29(1)(2) ಹಾಗೂ ನಿಯಮಾವಳಿ 2007, ನಿಯಮ 7 (2)ರಡಿ 27 ಜಿಲ್ಲೆಗಳಲ್ಲಿನ ಒಟ್ಟು 28 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಮೂರು ವರ್ಷಗಳ ಅವಧಿಗೆ ನಾಮನಿರ್ದೇಶನ ಮಾಡಿ ಸಮಿತಿಗಳನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ದಿನಾಂಕ : 26–02–2007ರ ಅಧಿಸೂಚನೆ ಮೂಲಕ ರಚಿಸಲಾದ ಮಕ್ಕಳ ಕಲ್ಯಾಣ ಸಮಿತಿಗಳ ಕಾರ್ಯಾವಧಿ ಪೂರ್ಣಗೊಂಡ ಹಿನ್ನೆಲೆಯಲ್ಲಿ ಹೊಸ ಸಮಿತಿಗಳು ರಚನೆಯಾಗದ ಕಾರಣ ಅಂತಿಮಗೊಂಡ ದಿನಾಂಕದಂದು ಕಾರ್ಯನಿರ್ವಹಿಸುತ್ತಿದ್ದ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಹೊಸ ಮಕ್ಕಳ ಕಲ್ಯಾಣ ಸಮಿತಿಯನ್ನು ರಚಿಸುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಮಕ್ಕಳ ಕಲ್ಯಾಣ ಸಮಿತಿಗೆ ಅಧ್ಯಕ್ಷರು/ಸದಸ್ಯರುಗಳನ್ನು ಮತ್ತು ಬಾಲನ್ಯಾಯ ಮಂಡಳಿಗಳಿಗೆ ಸಮಾಜ ಕಾರ್ಯಕರ್ತರನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಆಯ್ಕೆ ಸಮಿತಿಯು ಸಂದರ್ಶನ ನಡೆಸಿ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ನಡವಳಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು/ಸದಸ್ಯರನ್ನು ನಾಮನಿರ್ದೇಶನ ಮಾಡುವಂತೆ ಹಾಗೂ ಅಭ್ಯರ್ಥಿಗಳ ಕೊರತೆ ಇರುವ ಕಾರಣ ಚಿಕ್ಕಬಳ್ಳಾಪುರ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯ ವ್ಯಾಪ್ತಿಯನ್ನು ಕೋಲಾರಕ್ಕೂ ಹಾಗೂ ಯಾದಗಿರಿ ಜಿಲ್ಲೆಯ ಮಕ್ಕಳ ಕಲ್ಯಾಣ ಸಮಿತಿಯನ್ನು ಗುಲ್ಬರ್ಗಾಕ್ಕೂ ನಿಗದಿಪಡಿಸಿ ಆದೇಶ ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಆದೇಶ ಸಂಖ್ಯೆ : ಮಮಇ 206 ಮಭಾಬ 2010 ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2010.**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29 ರಡಿಯಲ್ಲಿ ಅನುಬಂಧ–1ರಲ್ಲಿರುವ ಷರತ್ತಿನೊಂದಿಗೆ ಅನುಬಂಧ–2ರಲ್ಲಿರುವ 28 ಜಿಲ್ಲೆಗಳ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಿದೆ.

ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಅಭ್ಯರ್ಥಿಗಳು ಲಭ್ಯವಾಗದ ಕಾರಣ ಸದರಿ ಜಿಲ್ಲೆಗಳ ಮಕ್ಕಳ ಕಲ್ಯಾಣ ಸಮಿತಿಗಳನ್ನು ಮುಂದಿನ ಆದೇಶದವರೆಗೆ ಕ್ರಮವಾಗಿ ಕೋಲಾರ ಮತ್ತು ಗುಲ್ಬರ್ಗಾ ಜಿಲ್ಲೆಗಳ ಕಾರ್ಯವ್ಯಾಪ್ತಿಗೆ ಒಳಪಡಿಸಿದೆ.

ಈ ಮಕ್ಕಳ ಕಲ್ಯಾಣ ಸಮಿತಿಗಳು ಬಾಲನ್ಯಾಯ ಕಾಯಿದೆ 2000 ಮತ್ತು ನಿಯಮ 2007ರನ್ವಯ ಪ್ರದತ್ತವಾದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರವನ್ನು ಹೊಂದಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ–1

**ಆದೇಶ ಸಂಖ್ಯೆ : ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ : 13–10–2010**

**ಷರತ್ತುಗಳು :**

1. ಮಕ್ಕಳ ಕಲ್ಯಾಣ ಸಮಿತಿಯ ಕಾರ್ಯವ್ಯಾಪ್ತಿಯು ಆಯಾ ಜಿಲ್ಲೆಗೆ ಮಾತ್ರ ಸೀಮಿತವಾಗಿರುತ್ತದೆ.
2. ರಕ್ಷಣೆ ಮತ್ತು ಪೋಷಣೆಗೆ ಒಳಪಡುವ ಮಕ್ಕಳ ಪ್ರಕರಣಗಳನ್ನು ಮಾತ್ರ ನಿರ್ವಹಿಸತಕ್ಕದ್ದು.
3. ಮಕ್ಕಳ ಕಲ್ಯಾಣ ಸಮಿತಿಯ ಅವಧಿಯು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷಗಳವರೆಗೆ ಸೀಮಿತವಾಗಿರುತ್ತದೆ.
4. ಪ್ರತಿಯೊಬ್ಬ ಸದಸ್ಯರು ಪ್ರತಿ ಸಿಟ್ಟಿಂಗ್‌ನಲ್ಲಿ ಕನಿಷ್ಠ 4 ಗಂಟೆಗಳು ಕಾರ್ಯನಿರ್ವಹಿಸತಕ್ಕದ್ದು.
5. ವಾರದಲ್ಲಿ ಕನಿಷ್ಠ 1 ದಿನ ಕಾರ್ಯನಿರ್ವಹಿಸಬೇಕು. ಬಾಕಿ ಪ್ರಕರಣಗಳ ಸಂಖ್ಯೆಗಳನ್ನು ಪರಿಶೀಲಿಸಿ ಸಿಟ್ಟಿಂಗ್‌ಗಳನ್ನು ಹೆಚ್ಚಿಸಬಹುದಾಗಿದೆ.
6. ಕೋರಂ ಸಮಿತಿಯ ಅಧ್ಯಕ್ಷರನ್ನು ಒಳಗೊಂಡಂತೆ 3 ಸದಸ್ಯರು ಪ್ರಕರಣಗಳ ಅಂತಿಮ ತೀರ್ಮಾನಗಳನ್ನು ಕೈಗೊಳ್ಳುವಾಗ ಇರಬೇಕಾಗುತ್ತದೆ.
7. ಸಿಟ್ಟಿಂಗ್‌ನ್ನು ಕಡ್ಡಾಯವಾಗಿ ಜಿಲ್ಲೆಯ ಬಾಲಮಂದಿರಗಳಲ್ಲಿ ನಡೆಸಬೇಕಾಗುತ್ತದೆ.
8. ತರಬೇತಿಯು ಕಡ್ಡಾಯ.
9. ಪ್ರತಿ ಸಿಟಿಂಗ್‌ಗಾಗಿ ರೂ. 500/– ನ್ನು ಸಿಟಿಂಗ್ ಫೀ ಆಗಿ ನಿಗದಿಪಡಿಸಲಾಗಿದೆ.

10. ರಾಜ್ಯ ಸರ್ಕಾರವು ನಿಗದಿಪಡಿಸುವ ದರದಲ್ಲಿ ಪ್ರಯಾಣ ಭತ್ಯೆಯನ್ನು ನೀಡಲಾಗುತ್ತದೆ.
11. ಸಮಿತಿಯ ಅವಧಿಯಲ್ಲಿ ಖಾಲಿಯಾಗುವ ಸ್ಥಾನಗಳಿಗೆ ಕಾಯ್ದಿರಿಸಿರುವ ಪಟ್ಟಿಯಿಂದ ಅಥವಾ ಹೊಸದಾಗಿ ಆಯ್ಕೆ ಮಾಡುವ ಮೂಲಕ ಸದಸ್ಯರನ್ನು ಭರ್ತಿ ಮಾಡಲಾಗುವುದು ಹಾಗೂ ಇವರ ಅವಧಿಯು ಸಮಿತಿಯ ಅವಧಿಗೆ ಸೀಮಿತವಾಗಿರುತ್ತದೆ.
12. ಸಮಿತಿಯವರು ರಾಜೀನಾಮೆ ನೀಡಬೇಕಾದ್ದಲ್ಲಿ ಒಂದು ತಿಂಗಳ ಪೂರ್ವದಲ್ಲೇ ರಾಜೀನಾಮೆ ತಿಳುವಳಿಕೆಯನ್ನು ಆಯ್ಕೆ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ/ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ.
13. ಸಮಿತಿಯ ಸದಸ್ಯತ್ವವನ್ನು ಈ ಕೆಳಗಿನ ಕಾರಣಗಳಿಂದ ರದ್ದುಗೊಳಿಸಲು ಅವಕಾಶವಿರುತ್ತದೆ.

**ಯಾವ ಸದಸ್ಯರು :–**

- ತಮ್ಮ ಅಧಿಕಾರ ದುರುಪಯೋಗ ಮಾಡಿಕೊಂಡು ದೋಷಿ ಎಂದು ಕಂಡು ಬಂದರೆ
- ತಮ್ಮ ಬುದ್ಧಿ ಸ್ಥಿಮಿತ ಕಳೆದುಕೊಂಡಲ್ಲಿ
- ದಿವಾಳಿ ಎಂದು ಘೋಷಿಸಿದಲ್ಲಿ
- ಅಸ್ಥಿತ್ವದಲ್ಲಿರುವ ಮಕ್ಕಳಿಗೆ ಮತ್ತು ಇತರೆ ಸಂಬಂಧಿತ ಕಾಯ್ದೆಗಳಡಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ
- ಸಕ್ರೀಯ ರಾಜಕಾರಣದಲ್ಲಿದ್ದಲ್ಲಿ
- ರಾಜ್ಯ ಸರ್ಕಾರದ ಗಮನಕ್ಕೆ ಸದರಿ ವ್ಯಕ್ತಿಯು ಸದಸ್ಯರಾಗಿ ಮುಂದುವರೆಯುವುದು ಅನಗತ್ಯವೆಂದು ಕಂಡು ಬಂದಲ್ಲಿ ವಿಚಾರಣೆ ನಡೆಸಿ ಸದಸ್ಯತ್ವದಿಂದ ತೆಗೆಯಲು ಅವಕಾಶವಿರುತ್ತದೆ
- ನಿರಂತರವಾಗಿ ಯಾವುದೇ ಸಮಂಜಸ ಕಾರಣವಿಲ್ಲದೆ 3 ತಿಂಗಳು ಸಮಿತಿಯ ಕಲಾಪಗಳಿಗೆ ಭಾಗವಹಿಸದಿದ್ದರೆ ಹಾಗೂ 1 ವರ್ಷದ ಒಟ್ಟು ಸಭೆಗಳಲ್ಲಿ ನಾಲ್ಕನೇ ಮೂರಕ್ಕಿಂತ ಕಡಿಮೆ ಸಭೆಗಳಿಗೆ ಹಾಜರಾಗಿದ್ದರೆ

14. ಉಪನಿರ್ದೇಶಕರು 15 ದಿವಸಗಳಿಗೊಮ್ಮೆ ಸಮಿತಿಗೆ ಹಾಜರಾಗುತ್ತಾರೆ ಮತ್ತು ಪ್ರಕರಣಗಳ ಪರಿಶೀಲನೆ ನಡೆಸುವ ಅಧಿಕಾರ ಹೊಂದಿರುತ್ತಾರೆ.
15. ಬಾಲನ್ಯಾಯ ಕಾಯ್ದೆ ಮತ್ತು ನಿಯಮಗಳಡಿ ಕಾರ್ಯನಿರ್ವಹಿಸತಕ್ಕದ್ದು.
16. ಎಲ್ಲಾ ಸಮಯದಲ್ಲೂ ಮಗುವಿನ ಒಳಿತಿನ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡೇ ಪ್ರಕರಣಗಳನ್ನು ನಿರ್ವಹಿಸತಕ್ಕದ್ದು.
17. ಖಾಸಗಿ, ಸರ್ಕಾರಿ ಅಥವಾ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಅವರ ಸಂಸ್ಥೆಯ ಮುಖ್ಯಸ್ಥರುಗಳಿಂದ ಮಕ್ಕಳ ಕಲ್ಯಾಣ ಸಮಿತಿಯಲ್ಲಿ ಕಾರ್ಯನಿರ್ವಹಿಸಲು ಅನುಮತಿ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

**ಸದಸ್ಯರು ಪಾಲಿಸಬೇಕಾದ ನಡವಳಿಕೆಗಳು :**

1. ಮಕ್ಕಳೊಡನೆ ಸಂಭಾಷಿಸುವಾಗ ಅಥವಾ ಸಮಿತಿಯ ಸಿಟ್ಟಿಂಗ್ ಸಂದರ್ಭಗಳಲ್ಲಿ ಅಥವಾ ಸಂಸ್ಥೆಗಳಿಗೆ ಭೇಟಿ ನೀಡಿದ ಸಂದರ್ಭಗಳಲ್ಲಿ ಅಸಭ್ಯವಾದ ಮಾತುಗಳು/ಸಂಜ್ಞೆಗಳನ್ನು ಬಳಸತಕ್ಕದ್ದಲ್ಲ.
2. ಸಿಟಿಂಗ್ ಸಂದರ್ಭದ ಹೊರತುಪಡಿಸಿ ಬೇರೆ ಸಮಯದಲ್ಲಿ ಅಧೀಕ್ಷಕರ ಅನುಮತಿ ಇಲ್ಲದೆ ಸಂಸ್ಥೆಗಳಿಗೆ ಭೇಟಿ ನೀಡತಕ್ಕದ್ದಲ್ಲ.
3. ಮಕ್ಕಳನ್ನು ಅವರುಗಳ ಜಾತಿ, ಧರ್ಮ, ಲಿಂಗ ವರ್ಣ ಮತ್ತು ಪ್ರಭೇದಗಳನ್ನು ಆಧರಿಸಿ ಭೇದ ತೋರಬಾರದು.
4. ಅಂಗವಿಕಲತೆ ಅಥವಾ ಅಡ್ಡ ಹೆಸರನ್ನು ಗುರುತಿಸಿ ಕರೆಯಬಾರದು.

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ–2

**ಆದೇಶ ಸಂ : ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ : 13–10–2010**

| ಕ್ರ. ಸಂ. | ಜಿಲ್ಲೆಯ ಹೆಸರು | ನಾಮನಿರ್ದೇಶನ ಮಾಡಿದ ಅಧ್ಯಕ್ಷರು ಮತ್ತು ಸದಸ್ಯರುಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | | ಪದನಾಮ |
|---|---|---|---|---|
| 1. | ಬೆಂಗಳೂರು (ನಗರ) ಮಕ್ಕಳ ಕಲ್ಯಾಣ ಸಮಿತಿ ಗಂಡು ಮಕ್ಕಳಿಗಾಗಿ : 1 | ರಾಧಾ ಶ್ರೀನಿವಾಸ್ ಮೂರ್ತಿ | ಸಿ–301, ಕಾಸ ಆನ್ಸಲ್ ಅಪಾರ್ಟ್‌ಮೆಂಟ್ಸ್, ಬನ್ನೇರುಘಟ್ಟ ರೋಡ್, ಬೆಂಗಳೂರು | ಅಧ್ಯಕ್ಷರು |
| | | ಮಹೇಶಯ್ಯ ಎಂ.ಬಿ. | # 49, ಎಸ್.ಓ.ಎಸ್. ಬಾಲಗ್ರಾಮ, ಬೆಂಗಳೂರು | ಸದಸ್ಯರು |
| | | ಪಿ.ಎನ್. ಬಸವರಾಜು | # 44, 3ನೇ ಅಡ್ಡರಸ್ತೆ, ಸರಸ್ವತಿ ಪುರಂ, ಅಲಸೂರು, ಬೆಂಗಳೂರು | ಸದಸ್ಯರು |
| | | ಉಷಾ ವಿ.ಜಿ. | # 34, ಅಪ್ನಾ, ನಮ್ಮನೆ, ಅನ್ನಸಂದ್ರ ಪಾಳ್ಯ, ಹೆಚ್.ಎ.ಎಲ್., ಬೆಂಗಳೂರು | ಸದಸ್ಯರು |
| | | ವಿಜಯಕುಮಾರ್ ಬಿ. | ಸ್ಪ್ಯಾಡ್, ಪ್ಲಾಟ್ ಸಂ. 1ಬಿ, ಓರಿಯಂಟ್ ಮೇನರ್ 15, ಹೈ ಬೀದಿ, ಐ.ಟಿ.ಸಿ ಇನ್‌ಫೋಟೆಕ್ ಪಾರ್ಕ್ ಎದುರು, ಕುಕ್ ಟೌನ್, ಬೆಂಗಳೂರು | ಸದಸ್ಯರು |
| | | ಮೀನಾ ಕೆ. ಜೈನ್ | # 1364, 2ನೇ ಮಹಡಿ, 4ನೇ ಅಡ್ಡರಸ್ತೆ, 1ನೇ ಸ್ಟೇಜ್, 2ನೇ ಹಂತ, ಚಂದ್ರಾಲೇಔಟ್, ಬೆಂಗಳೂರು | ಅಧ್ಯಕ್ಷರು |
| | | ಜೆಸ್ಸಿಂತಾ ಲೋಬೋ | ನವಜೀವನ, ನಂ. 257, 1ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು | ಸದಸ್ಯರು |
| | | ಅನುಪಮ ದಿನೇಶ್ ಹೆಗಡೆ | #89, ಮೊದಲನೇ ಮಹಡಿ, 12ನೇ ಮುಖ್ಯ | ಸದಸ್ಯರು |

| | | | | |
|---|---|---|---|---|
| 1ಅ | ಮಕ್ಕಳ ಕಲ್ಯಾಣ ಸಮಿತಿ ಹೆಣ್ಣು ಮಕ್ಕಳಿಗಾಗಿ : 2 | | ರಸ್ತೆ, 23ನೇ ಅಡ್ಡ ರಸ್ತೆ, 3ನೇ ಬ್ಲಾಕ್ ಪೂರ್ವ, ಜಯನಗರ, ಬೆಂಗಳೂರು | |
| | | ವಿಶಾಲಾಕ್ಷಿ ಟಿ.ಎಸ್. | ನಂ. 3138, ಗಾಯತ್ರಿನಗರ, 2ನೇ ಅಡ್ಡರಸ್ತೆ, ಬೆಂಗಳೂರು | ಸದಸ್ಯರು |
| | | ಶಿವಮಲ್ಲು | ಬಾಸ್ಕೋ ಯುವೋದಯ, ನಂ. 91, ಬಿ ಬೀದಿ, 6ನೇ ಅಡ್ಡರಸ್ತೆ, ಗಾಂಧೀನಗರ, ಬೆಂಗಳೂರು | ಸದಸ್ಯರು |
| 2 | ಬೆಂಗಳೂರು ಗ್ರಾಮಾಂತರ | ಅಲಿಸ್ ಅಲೋಷಿಯಸ್ | # 80, 2ನೇ ಮೈನ್, ಬಿ.ಡಿ.ಎಸ್. ಗಾರ್ಡನ್, ಗೆದ್ದಲಹಳ್ಳಿ, ಕೊತ್ತನೂರು ಪೋಸ್ಟ್, ಬೆಂಗಳೂರು | ಅಧ್ಯಕ್ಷರು |
| | | ಜೆ ನಾಗೇಂದ್ರ | # 138, ಎಸ್.ಬಿ.ಎಂ. ಕಾಲೋನಿ, 2ನೇ ಅಡ್ಡರಸ್ತೆ, 5ನೇ ಮುಖ್ಯ ರಸ್ತೆ, ಆನಂದನಗರ, ಬೆಂಗಳೂರು | ಸದಸ್ಯರು |
| | | ಸಿದ್ದರಾಜು ಜೆ. | ನಂ. 551, 2ನೇ ಬಿ ಅಡ್ಡರಸ್ತೆ, 3ನೇ ಹಂತ, 3ನೇ ಘಟ್ಟ, 6ನೇ ಮುಖ್ಯ ರಸ್ತೆ, ಬಸವೇಶ್ವರ ನಗರ, ಬೆಂಗಳೂರು | ಸದಸ್ಯರು |
| | | ಕೆ.ಎಸ್. ಸಿದ್ದೇಗೌಡ | ಬಿನ್. ಲೇಟ್ : ಶಂಭಯ್ಯ., ಶ್ಯಾಸಾಪುರ ಗ್ರಾಮ ಮತ್ತು ಅಂಚೆ, ಕುಡಗಲ್ ಹೋಬಳಿ, ರಾಮನಗರ(ತಾ), ರಾಮನಗರ ಜಿಲ್ಲೆ | ಸದಸ್ಯರು |
| | | ರಾಮಚಂದ್ರಪ್ಪ ಹೆಚ್.ಟಿ. | ಶ್ರೀ ವೆಂಕಟೇಶ್ವರ ನಿಲಯ, ನಂ.1, 8ನೇ ಅಡ್ಡರಸ್ತೆ, ವಿ.ವಿ. ಎಕ್ಸ್‌ಟೆನ್ಷನ್, ಕಾಲೇಜು ರಸ್ತೆ, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸದಸ್ಯರು |
| 3. | ಬಾಗಲಕೋಟೆ | ಡಾ: ಎಸ್.ವಿ. ಪಂಚಮುಖಿ | ಸೆಕ್ಟರ್ ನಂ.–54, ಫ್ಲಾಟ್ ನಂ. 76 ಇ, ನವನಗರ, ಬಾಗಲಕೋಟೆ | ಅಧ್ಯಕ್ಷರು |
| | | ರೂಪ ನೀಲಕಂಠ ಘಂಟಿ | ವಕೀಲರು, ಘಂಟಿ ಬಿಲ್ಡಿಂಗ್, ಎಕ್ಸ್‌ಟೆನ್ಷನ್ ಏರಿಯಾ, ಬಾಗಲಕೋಟೆ | ಸದಸ್ಯರು |
| | | ಮಂಜುಳಾ ಯೋಗೇಂದ್ರ ಜೋಷಿ | ಸ್ವಯಂ ಸೇವಾ ಅಭಿವೃದ್ಧಿ ಸಂಸ್ಥೆ(ರಿ) ಕಮತಗಿ, ಬಸರಿಕಟ್ಟೆ ರೋಡ್, ಬಾಗಲಕೋಟೆ | ಸದಸ್ಯರು |
| | | ಶಾರದಾ ಅಂದಾನೆಪ್ಪ ಬದಾಮಿ | ವಕೀಲರು, ಕೌಟುಂಬಿಕ ಸಲಹೆಗಾರರು, ದಾನೇಶ್ವರಿ ನಿಲಯ, 8ನೇ ರೋಡ್, ವಿದ್ಯಾಗಿರಿ, ಬಾಗಲಕೋಟೆ | ಸದಸ್ಯರು |
| | | ಅಂತೋನಿಯಪ್ಪ | ಎಂ.ಡಿ.ಜಿ.–2, ನಂ. 28, ಹೌಸಿಂಗ್ ಕಾಲೋನಿ, ಮಂಜೂರು ರೋಡ್, ಮುಧೋಳ್, ಬಾಗಲಕೋಟೆ ಜಿಲ್ಲೆ | ಸದಸ್ಯರು |
| 4. | ಬೆಳಗಾಂ | ಮರಿಯಾ ಜಾಯ್‌ಲಿನ್ | "ಕಾರ್ಮೆಲ್ ನಿವಾಸ" ದೇವಲಾಪುರ ರೋಡ್, ಬೈಲಹೊಂಗಲ, ಬೆಳಗಾಂ | ಅಧ್ಯಕ್ಷರು |
| | | ನಂದಕಿಶೋರ್ ಗೌಡರ | ಬಡಿಗೇರ ಬೀದಿ, ಹುಕ್ಕೇರಿ, ಬೆಳಗಾಂ ಜಿಲ್ಲೆ | ಸದಸ್ಯರು |
| | | ನಂದ ಎಂ. ನಾಯಕರ್ | # 362, ಗಾಂಧೀಗಲ್ಲಿ, ಬಸವಣ ಕುಡಚಿ, ಬೆಳಗಾವಿ | ಸದಸ್ಯರು |
| | | ಶೈಲಜಾ ಬಿ. ಕುರುಬೇಟ್ | ಯುನೈಟೆಡ್ ಸಮಾಜ ಕಲ್ಯಾಣ ಸಂಸ್ಥೆ, ಶ್ರೀ ಶಾರದಾ ಮಾತಾ ಸ್ವಾಧಾರ ಕೇಂದ್ರ, ಗೋವರ್ಧನ ಬಿಲ್ಡಿಂಗ್ ಎ.ಪಿ.ಎಂ.ಸಿ ರೋಡ್, ಸಂಗಮೇಶ್ವರ ನಗರ, ಬೆಳಗಾಂ | ಸದಸ್ಯರು |
| | | ಸುನಂದ ಶಿ. ಕಾಮೊಳ್ಳಿ ಮಠ | ಕೇರಾಫ್, ಯು.ಹೆಚ್. ಹಿರೇಮಠ್, ಟಾಡ್‌ಕರ್ಸ್ ಬಿಲ್ಡಿಂಗ್, ವಿನಾಯಕ ನಗರ, ಹಿಂಡಲ್ಗ ರೋಡ್, ಬೆಳಗಾಂ | ಸದಸ್ಯರು |
| 5. | ಬಳ್ಳಾರಿ | ಪೀರ್ ಮೊಹಮದ್. ಬಿ. | ವಕೀಲರು, ಎಂ.ಆರ್. ಮಂಜಿಲ್, 6ನೇ ಕ್ರಾಸ್, ಹುಸ್ಸೇನ್‌ನಗರ, ಬಳ್ಳಾರಿ | ಅಧ್ಯಕ್ಷರು |
| | | ಎಂ. ಪ್ರೇಮಲತಾ | # 120/17, ಸಾರಂಗಂ ಕಾಂಪೌಂಡ್, 3ನೇ ಕ್ರಾಸ್, ಸತ್ಯನಾರಾಯಣ ಪೇಟೆ, ಬಳ್ಳಾರಿ | ಸದಸ್ಯರು |
| | | ಹೆಚ್. ವೀರಶೇಖರ | ವಕೀಲರು, ಚಾಗನೂರು ಗ್ರಾಮ, ಹಗರಿ ಪೋಸ್ಟ್, ಬಳ್ಳಾರಿ ಜಿಲ್ಲೆ | ಸದಸ್ಯರು |
| | | ಆರ್. ಯಶೋದ | ಕೋಂ ರಾಜಗೋಪಾಲ್, 18/60, 3ನೇ ಕ್ರಾಸ್, ಪಾರ್ವತಿನಗರ, ಬಳ್ಳಾರಿ | ಸದಸ್ಯರು |

| | | | | |
|---|---|---|---|---|
| | | ಜಿ. ಪದ್ಮಿನಿ ಜಿ.ವಿ.ಆರ್. ಮೂರ್ತಿ | ಪ್ಲಾಟ್ ನಂ. 405, ಕಪಗಲ್ ರೋಡ್, ಬಳ್ಳಾರಿ | ಸದಸ್ಯರು |
| 6. | ಬೀದರ್ | ಮಾಣಿಕ ರಾವ್ ಬಾಲ್ಕಿ | ಸಿದ್ದಾರ್ಥ ಕಲಾ ಮತ್ತು ವಾಣಿಜ್ಯ ಪದವಿ ಮಹಾ ವಿದ್ಯಾಲಯ, ಜನವಾಡ ರಸ್ತೆ, ಬೀದರ್ | ಅಧ್ಯಕ್ಷರು |
| | | ಬಜರಂಗ ಲೋಹಾರ್ | ಕೆ/ಆ ರಮೇಶ ಹುಡಗಿ, ವಕೀಲರು, ಇಂದಿರಾ ಮಾರ್ಕೆಟ್ ಕಾಂಪ್ಲೆಕ್ಸ್, ಹಳೆ ಬಸ್‌ಸ್ಟ್ಯಾಂಡ್ ಹತ್ತಿರ, ಬೀದರ್ | ಸದಸ್ಯರು |
| | | ರಮೇಶ್ ಅಂಬುಲಕರ್ | 16–1–292, ಕೈಲಾಸನಗರ, ಮನ್ನಳ್ಳಿ ರಸ್ತೆ, ಬೀದರ್ | ಸದಸ್ಯರು |
| | | ವೈಜಿನಾಥ್ ಹಿರೆಮಠ | # 9–12–365/ಎ, ಮೈಲೂರ ರಸ್ತೆ, ವಿದ್ಯಾನಗರ ಕಾಲೋನಿ, ಬೀದರ್ | ಸದಸ್ಯರು |
| | | ಶ್ರೀನಿವಾಸ ಕರಾಟೆ | ಜನವಾಡ ತಾ, ಬೀದರ್ | ಸದಸ್ಯರು |
| 7. | ಬಿಜಾಪುರ | ವಾಸುದೇವ ಎಸ್. ತೋಳಬಂದಿ | ನೀಲಾಂಭಿಕ ನಿವಾಸ, ಶಾಂತಿನಗರ, ಬಿಜಾಪುರ | ಅಧ್ಯಕ್ಷರು |
| | | ಜೆರಾಲ್ಡ್ ಡಿಸೋಜಾ | ಸಿ.ಎನ್.ಎಫ್.ಇ, 54, ಮುಕುಂದನಗರ, ಸ್ಟೇಷನ್ ರೋಡ್, ಬಿಜಾಪುರ | ಸದಸ್ಯರು |
| | | ವನಿತಾ ಎಸ್ ತೊರವಿ | ಗ್ಯಾನಿ ಪ್ಲಾಟ್, ಗಣೇಶ್ ಗುಡಿ ಹತ್ತಿರ, ಸ್ಟೇಷನ್ ರಸ್ತೆ, ಬಿಜಾಪುರ | ಸದಸ್ಯರು |
| | | ಲಲಿತಾ ಪಿ. ಶೆಟ್ಟರ್ | ಕಾಸಗೇರಿಗಲ್ಲಿ, ಭಾಗಿರಥಿ ನಿವಾಸ, ಬಿಜಾಪುರ | ಸದಸ್ಯರು |
| | | ಶ್ರೀಧರ್ ಗೋವಿಂದರಾವ್ ಕುಲಕರ್ಣಿ | ಚಿದಂಬರ ನಗರ, ಇಬ್ರಾಹಿಂಪೂರ ಹತ್ತಿರ, ಬಾಗೆವಾಡಿ ರಸ್ತೆ, ಎನ್.ಹೆಚ್.–13, ರಿಂಗ್ ರಸ್ತೆ ಹತ್ತಿರ, ಬಿಜಾಪುರ | ಸದಸ್ಯರು |
| 8. | ಚಾಮರಾಜನಗರ | ಬಿ.ಲೋಚನ | ಶಂಕರಪುರ 2ನೇ ಕ್ರಾಸ್, ಚಾಮರಾಜನಗರ | ಅಧ್ಯಕ್ಷರು |
| | | ಚಂದ್ರನಾಯಕ್ ಕೆ.ಹೆಚ್. | ಸಿಂಗನಪುರ, ಕಣ್ಣೇಗಾಲ ಅಂಚೆ ಚಾಮರಾಜನಗರ ತಾಲ್ಲೂಕು | ಸದಸ್ಯರು |
| | | ಮಮತ ಬಿ. | ಕೋಂ ವಿಶ್ವನಾಥ್, ಎಸ್.ಆರ್.ಎಸ್. ಕಟ್ಟಡ, ದೇವಾಂಗ 3ನೇ ಬೀದಿ, ಚಾಮರಾಜನಗರ | ಸದಸ್ಯರು |
| | | ಹೆಚ್. ಹೇಮಾವತಮ್ಮ | # 214, ಎಲ್.ಐ.ಸಿ. ಕಾಲೋನಿ, ಶ್ರೀರಾಮಪುರ, 2ನೇ ಅಡ್ಡರಸ್ತೆ, ಮೈಸೂರು, ಚಾಮರಾಜನಗರ ಜಿಲ್ಲೆ | ಸದಸ್ಯರು |
| | | ನಟರಾಜು ಎಂ. | ಮಲ್ಲಯ್ಯನಪುರ, ಉತ್ತುವಳ್ಳಿ ಅಂಚೆ, ಚಾಮರಾಜನಗರ | ಸದಸ್ಯರು |
| 9. | ಚಿಕ್ಕಮಗಳೂರು | ಮಮತ ಡಿ.ಎಸ್. | ಕಾಳಿದಾಸನಗರ, ವಸವನಹಳ್ಳಿ, ಚಿಕ್ಕಮಗಳೂರು | ಅಧ್ಯಕ್ಷರು |
| | | ಜಗದೀಶ ಬಿ.ಆರ್. | ಬಿಳೇಕಲ್ಲು, ಜ್ಯೋತನಗರ ಅಂಚೆ, ಚಿಕ್ಕಮಗಳೂರು | ಸದಸ್ಯರು |
| | | ಕೆ.ಬಿ. ಸೋಮೇಶ್ | ಸೋಮೇಶ್ವರ ನಿಲಯ, ಟಿ.ಬಿ. ರಸ್ತೆ, ಕಡೂರು, ಚಿಕ್ಕಮಗಳೂರು | ಸದಸ್ಯರು |
| | | ನಟರಾಜ್ ಹೆಚ್.ಸಿ. | ನ್ಯಾಯವಾದಿಗಳು, ರಂಗಣ್ಣನ ಛತ್ರದ ಎದುರು, ಬಸವನಹಳ್ಳಿ, ಚಿಕ್ಕಮಗಳೂರು | ಸದಸ್ಯರು |
| | | ಸುರೇಶ್ ಚಂದ್ರ ಎಸ್. | ಸಂಕಣ್ಣನ ಬೀದಿ, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ | ಸದಸ್ಯರು |
| 10. | ಚಿತ್ರದುರ್ಗ | ಡಿ.ಕೆ.ಶೀಲಾ | # 14, 1ನೇ ಮುಖ್ಯ ರಸ್ತೆ, ಸರಸ್ವತೀಪುರಂ ರಸ್ತೆ, ಬೈಪಾಸ್ ಸರ್ಕಲ್, ಚಿತ್ರದುರ್ಗ | ಅಧ್ಯಕ್ಷರು |
| | | ಸುಮನ ಎಸ್. ಅಂಗಡಿ | ರೀಡರ್ ಇನ್ ಲಾ, ನಂ. 1000, ದೊಡ್ಡಪೇಟೆ, ರಂಗಯ್ಯನಬಾಗಿಲು ಹತ್ತಿರ, ಚಿತ್ರದುರ್ಗ | ಸದಸ್ಯರು |
| | | ಎಸ್.ಬಿ. ಶಿವಕುಮಾರ್ | ಉಪನ್ಯಾಸಕರು, ಬಸವಶ್ರೀ, # 45, ಜೋಗಿಮಟ್ಟಿ ರಸ್ತೆ, 6ನೇ ಕ್ರಾಸ್, ಚಿತ್ರದುರ್ಗ | ಸದಸ್ಯರು |
| | | ಎಸ್. ಶೇಷಾದ್ರಿ | ವಕೀಲರು, ಪ್ರಧಾನ ರಸ್ತೆ, ಹಿರಿಯೂರು ಚಿತ್ರದುರ್ಗ ಜಿಲ್ಲೆ | ಸದಸ್ಯರು |

| | | | | |
|---|---|---|---|---|
| | | ಮಧುಕರ್ ಎಸ್. | ವಕೀಲರು, "ದ್ಯಾಮಲಂಬ ನಿಲಯ" ಜೋಗಿಮಟ್ಟಿ ರಸ್ತೆ, 5ನೇ ಕ್ರಾಸ್, ಪಟ್ಟದ ಪರಮೇಶ್ವರಿ ಸ್ಕೂಲ್ ಹಿಂಭಾಗ, ಚಿತ್ರದುರ್ಗ | ಸದಸ್ಯರು |
| 11. | ಧಾರವಾಡ | ಡಾ. ಶಂಕರ್ ಆರ್. ಲಮಾಣಿ | ಕೇರ್ ಆಫ್ ಎಸ್.ಬಿ.ಶಿಂಧ, # 27, 2ನೇ ಕ್ರಾಸ್, ಜಯನಗರ, ಧಾರವಾಡ | ಅಧ್ಯಕ್ಷರು |
| | | ಸಿ ರಜಿನಾ ಐರಿನ್ ಡಿಸಿಲ್ವಾ | ಶಾಂತಿ ಪ್ರಗತಿ ಕೇಂದ್ರ, ನಿರ್ಮಲ ನಗರ, ಧಾರವಾಡ | ಸದಸ್ಯರು |
| | | ಮಂಜುನಾಥ ನಾಗಪ್ಪ ಸಣ್ಣಿಂಗಣ್ಣನವರ್ | ನಂ. 42/87, ನೆಹರುನಗರ, ಗೋಕುಲ ರೋಡ್, ಹುಬ್ಬಳ್ಳಿ | ಸದಸ್ಯರು |
| | | ರುದ್ರಗೌಡ ಯಲ್ಲಪ್ಪಗೌಡ ಶಿರೂರ | ಹೊಸ ಓಣಿ, ಗುಲಗಂಜಿಕೊಪ್ಪ, ಧಾರವಾಡ | ಸದಸ್ಯರು |
| | | ಡಾ. ಪೂರ್ಣಿಮ ಅಶೋಕ ಗೌರೋಜಿ | ಕೇರ್ ಆಫ್, ಗೌರೋಜಿ ಕ್ಲಿನಿಕ್, ಸಿ/1182, ರಾಮನಗರ, 1ನೇ ಮೇನ್, ಎನ್.ಟಿ.ಟಿ.ಎಫ್ ಹತ್ತಿರ, ಧಾರವಾಡ | ಸದಸ್ಯರು |
| 12. | ದಾವಣಗೆರೆ | ಕುರಿಯಾ ಕೊಸ್ ಎನ್. ಯು. | ಡಾನ್ ಬಾಸ್ಕೋ ಬಾಲಕಾರ್ಮಿಕರ ಮಿಷನ್, ಮೊದಲನೇ ಮುಖ್ಯ ರಸ್ತೆ, ವಿಜಯನಗರ ಬಡಾವಣೆ, ಕೊಂಡಜ್ಜಿ ರಸ್ತೆ, ದಾವಣಗೆರೆ | ಅಧ್ಯಕ್ಷರು |
| | | ಡಾ. ಎ. ನಾಗರಾಜಚಾರಿ | # 3682/ಎ–58, "ಗಾಯತ್ರಿ ಕೃಪ", 7ನೇ ಕ್ರಾಸ್, 1ನೇ ಮೈನ್, ತರಳುಬಾಳುನಗರ, ದಾವಣಗೆರೆ | ಸದಸ್ಯರು |
| | | ವಸಂತ ಕುಮಾರಿ ಐ | ಶ್ರೀ ಜಯದೇವ ಕಾಂಪ್ಲೆಕ್ಸ್, ಬೆಳುಂದಿ ಸ್ಟ್ರೀಟ್, ದಾವಣಗೆರೆ | ಸದಸ್ಯರು |
| | | ಕೆ.ಎನ್. ಶಿವಕುಮಾರ್ | # 692/4, ಕೊಟ್ರೇಶ್ ನಿವಾಸ, ಎಸ್.ಬಿ.ಎಂ. 1ನೇ ಕ್ರಾಸ್, ನಿಟ್ಟುವಳ್ಳಿ ನ್ಯೂ ಎಕ್ಸ್‌ಟೆನ್ಷನ್, ಲೆನಿನ್ ನಗರ 2ನೇ ಸ್ಟೇಜ್, ದಾವಣಗೆರೆ | ಸದಸ್ಯರು |
| | | ಎಸ್.ಎಂ. ಶಿವಾನಂದ ಸ್ವಾಮಿ | # 1966/98, "ಶಿವಗಂಗಾ", "ಎ" ಬ್ಲಾಕ್ ಎಸ್.ಎಸ್. ಲೇಔಟ್, ದಾವಣಗೆರೆ | ಸದಸ್ಯರು |
| 13. | ಗದಗ | ಪೀರವ್ವ ವಿ. ಗೋಣೆಣ್ಣ ನವರ್ | ಕೇರ್ ಆಫ್ ಒಡೆಯಾರ್ ಬಿಲ್ಡಿಂಗ್, ವಿವೇಕಾನಂದ ನಗರ, ಗದಗ್ ಜಿಲ್ಲೆ | ಅಧ್ಯಕ್ಷರು |
| | | ಸುದೀರ ಸಿಂಹ ಆರ್ ಘೋರ್ಪಡೆ | ಸಿ.ಡಿ.ಓ. ಜೈನ್ ಶಾಲೆ ಹತ್ತಿರ, ರಾಜೋಟೇಶ್ವರ ನಗರ, ಗದಗ್ | ಸದಸ್ಯರು |
| | | ಸುಮಿತ್ರ ಬಸಪ್ಪ ಶ್ರೀಗಿರಿ | "ಸಂಗಮೇಶ್ವರ ಕೃಪಾ" ಜೆ.ಟಿ.ಕಾಲೇಜು ರೋಡ್, ಗದಗ್ | ಸದಸ್ಯರು |
| | | ಗುರುಲಿಂಗಯ್ಯ ಚನ್ನಬಸಯ್ಯ ರೇಶ್ಮಿ | ರಾಜಾಜಿ ಮುಖ್ಯ ರಸ್ತೆ, 2ನೇ ಅಡ್ಡರಸ್ತೆ, ಬೆಟಗೇರಿ, ಗದಗ್ | ಸದಸ್ಯರು |
| | | ಸುಮಿತ್ರಾ ಸಿದ್ದಪ್ಪ ಬಾವಿಕಟ್ಟೆ | ಕೇರಾಫ್ ಎಂ. ಜೋಗಿನ, ಒಕ್ಕಲಗೇರಿ, ಕುಂಬಾರ ಓಣಿ, ಗದಗ್ | ಸದಸ್ಯರು |
| 14. | ಗುಲ್ಬರ್ಗಾ | ಆನಂದ್ | ಮಾರ್ಗದರ್ಶಿ ಸಂಸ್ಥೆ, ಕೆ.ಪಿ.ಟಿ.ಸಿ.ಎಲ್. (ಕೆ.ಇ.ಬಿ.) ವಸತಿ ಗೃಹ, ತಾರಾ ಫೈಲ್, ಗುಲ್ಬರ್ಗಾ | ಅಧ್ಯಕ್ಷರು |
| | | ಐರಿನ್ ಥೆರೆಜ್ ಲೋಬೋ | ದೀಪಾಲಯ, ಡಿ–104, ನಿವ್‌ಷನ್ ಗ್ರಿಂಲಾ ಅಪಾರ್ಟ್‌ಮೆಂಟ್, ಸಂತೋಷ್ ಕಾಲೋನಿ, ಗುಲ್ಬರ್ಗಾ | ಸದಸ್ಯರು |
| | | ಪ್ರೊ. ಲಿಂಗಾರಾಜ ಎಂ. ಕೋಣಿನ್‌ಕರ್ | # 3–335, ಗಾಜೀಪುರ (ಚಕ್ರಕಟ್ಟ), ಗುಲ್ಬರ್ಗಾ | ಸದಸ್ಯರು |
| | | ಸೂರ್ಯಕಾಂತ, ಎಮ್.ಹೆಚ್. | # ಇ–1–418313, 14ನೇ ಕ್ರಾಸ್, ಕೆ.ಇ.ಬಿ. ರಸ್ತೆ, ತಾರಾ ಫೈಲ್, ಗುಲ್ಬರ್ಗಾ ಜಿಲ್ಲೆ | ಸದಸ್ಯರು |
| | | ಮಲ್ಲಿಕಾರ್ಜುನ ವೀರಣ್ಣ ದುತ್ತರಗಾಂವ್ | # 134/17, ಜಾಧವ ಲೇಔಟ್, ಬಿದ್ದಾಪುರ ಕಾಲೋನಿ, ಗುಲ್ಬರ್ಗಾ | ಸದಸ್ಯರು |
| 15. | ಹಾಸನ | ಎಂ.ಎಸ್. ಮಧುರ | ಕೋಂ ಗಿರಿಗೌಡ ಕೇರ್ ಆಫ್ ಗ್ಯಾಸ್ ಸತೀಶ್, ವಿಜಯನಗರ ಬಡಾವಣೆ, ರೇಷ್ಮೆ ಇಲಾಖೆ, ಹತ್ತಿರ, ಸಕಲೇಶಪುರ ರಸ್ತೆ, ಹಾಸನ | ಅಧ್ಯಕ್ಷರು |

| | | | | |
|---|---|---|---|---|
| | | ಅನಿಲ್ ಕ್ರಿಸ್ಟೊಫರ್ | ಇ.ಡಬ್ಲ್ಯೂಎಸ್–779, ಕೆ.ಹೆಚ್.ಬಿ. ಕುವೆಂಪುನಗರ, ಹಾಸನ | ಸದಸ್ಯರು |
| | | ಜಿ.ಡಿ. ರಮಾಕಾಂತ | ಪ್ರೇಮ ನಿಲಯ, ದೇವರಾಜ ಅರಸ್ ರಸ್ತೆ, ವಿದ್ಯಾನಗರ, ಹಾಸನ | ಸದಸ್ಯರು |
| | | ದೇವರಾಜು | ಎನ್‌ಸಿಸಿ ಆಫೀಸ್ ಹತ್ತಿರ, ಹೇಮಂತ್ ಡ್ರಸ್ ಮೇಕರ್ಸ್ ಪಕ್ಕ, ಕಾಲೇಜು ರಸ್ತೆ, ಹಾಸನ | ಸದಸ್ಯರು |
| | | ಡಾ: ಎ. ವಾಣಿ ನಾಗೇಶ | "ನವ" ಕಿವಿ ಮೂಗು, ಗಂಟಲು ಮತ್ತು ದಂತ ಚಿಕಿತ್ಸಾ ಕೇಂದ್ರ, ಆರ್.ಸಿ.ರಸ್ತೆ, ಹಾಸನ | ಸದಸ್ಯರು |
| 16. | ಹಾವೇರಿ | ಡಾ: ರಾಜಕುಮಾರ ಎನ್. ಮರೋಳ | ಶಿವಜ್ಯೋತಿ ಮಕ್ಕಳ ಆರೋಗ್ಯ ಸಂಸ್ಥೆ, ಹೆಗ್ಗೆರಿ ರೋಡ್, ಹಾವೇರಿ | ಅಧ್ಯಕ್ಷರು |
| | | ಗೀತಾ ವಿ. ಪೂಜಾರ | ಮಲಗುಂದ, ಕಲ್ಲಾಪುರ, ಪೋ ಹಾನಗಲ್, ಹಾವೇರಿ | ಸದಸ್ಯರು |
| | | ಕರಿಬಸಪ್ಪ ಲಕ್ಷ್ಮಪ್ಪ ಅಂಗರಗಟ್ಟಿ | ವಿದ್ಯಾನಗರ, 3ನೇ ರಸ್ತೆ, ಮುನ್ಸಿಪಲ್ ಹೈಸ್ಕೂಲ್ ರಸ್ತೆ, ಹಾವೇರಿ | ಸದಸ್ಯರು |
| | | ಮೈತ್ರಾ ಶಿವಪ್ಪ ಹದಡಿ | ಗಾಂಜಿಗಲ್ಲಿ ಕೋಟೆ, ರಾಣಿಬೆನ್ನೂರು ತಾಲ್ಲೂಕು, ಹಾವೇರಿ | ಸದಸ್ಯರು |
| | | ಅರವಿಂದ ವೀರಭದ್ರಪ್ಪ ಕಾಳಪ್ಪನವರ್ | "ಬಿ" ಬ್ಲಾಕ್, 3ನೇ ಮುಖ್ಯ ರಸ್ತೆ, ವಿದ್ಯಾನಗರ, ಹಾವೇರಿ | ಸದಸ್ಯರು |
| 17. | ಕೊಡಗು | ಡಾ: ಎಸ್.ಎಂ. ಕಾವೇರಪ್ಪ | ಹಳೆ ತಾಲ್ಲೂಕು, ನಾಪೋಕ್ಲು ಅಂಚೆ, ಕೊಡಗು ಜಿಲ್ಲೆ | ಅಧ್ಯಕ್ಷರು |
| | | ಬಿ. ಸಿದ್ದರಾಜು ಬೆಳ್ಳಪ್ಪ | ಮದೆಮಹೇಶ್ವರ ಪದವಿ ಪೂರ್ವ ಕಾಲೇಜು, ಮದೆ ಮಡಕೇರಿ, ಕೊಡಗು | ಸದಸ್ಯರು |
| | | ಬಿ.ಎಸ್. ಸತೀಶ್ | ನಾಕೂರು ಗ್ರಾಮ ಕಾನ್‌ಬೈಲ್ ಅಂಚೆ, ಸುಂಟಿಕೊಪ್ಪ, ಕೊಡಗು | ಸದಸ್ಯರು |
| | | ರೂಪ ಕೆ.ಎ. | ಪಿ.ಬಿ. 26, ಮರ್ನಾಡ್ ಅಂಚೆ ಕೊಡಗು | ಸದಸ್ಯರು |
| 18. | ಕೋಲಾರ | ಕಲೈಸೆಲ್ವಿ | ರಂಗನಾಥನ್ ಕಾಂಪೌಂಡ್, 3ನೇ ಬ್ಲಾಕ್, ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್. ಕೋಲಾರ | ಅಧ್ಯಕ್ಷರು |
| | | ಶ್ರೀಧರ್ ಎಸ್. | 1055, 3ನೇ ಕ್ರಾಸ್, ಹೊಸ ಬಡಾವಣೆ, ಮಹಿಳಾ ಕಾಲೇಜು ಹಿಂಭಾಗ, ಕೋಲಾರ | ಸದಸ್ಯರು |
| | | ಜಿ.ವಿನೋದ್ ಕುಮಾರ್ | "ಶ್ರೀರಾಮ ನಿಲಯ" ವೈಶ್ಯ ಬ್ಯಾಂಕ್ ಬಳಿ, ದೊಡ್ಡಪೇಟೆ, ಕೋಲಾರ | ಸದಸ್ಯರು |
| | | ಯಶೋದಮ್ಮ ಕೆ. | ಕನ್ನಸಂದ್ರ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ | ಸದಸ್ಯರು |
| | | ಪೊನ್ನುಮುತ್ತು ಕೆ. | #524, ಬಿ.ಜಿ.ಎಂ.ಎಲ್. ಹಾಸ್ಪಿಟಲ್ ಕ್ವಾಟ್ರಸ್, ಮೀಟರ್ ಹೌಸ್ ಹತ್ತಿರ, ಚಾಂಪಿಯನ್ ರೀಫ್, ಕೆ.ಜಿ.ಎಫ್ | ಸದಸ್ಯರು |
| 19. | ಕೊಪ್ಪಳ | ಎಂ. ರಾಜಶೇಖರ್ | ಸಂಗಮೇಶ್ವರ ನಿಲಯ, ಕೀರ್ತಿ ಕಾಲೋನಿ, ಮನೆ # 441, ನೃಪತುಂಗ ಶಾಲೆ ಹತ್ತಿರ, ಕೀರ್ತಿ ಕಾಲೋನಿ, ಭಾಗ್ಯನಗರ, ಕೊಪ್ಪಳ | ಅಧ್ಯಕ್ಷರು |
| | | ಕಾಳಮ್ಮ | ಕೋಂ ಈಶಪ್ಪ ಪತ್ತಾರ್, ಮಾನಸ ನಿಲಯ, ಬಿ.ಟಿ. ಪಾಟೀಲನಗರ, ಬ್ಯಾಂಕ್ ಕಾಲೋನಿ, ಕೊಪ್ಪಳ | ಸದಸ್ಯರು |
| | | ಶೇಖರಗೌಡ ರಾಮತ್ನಾಳ | ಹಿರೇಅರಳಿಹಳ್ಳಿ ಪೋಸ್ಟ್ ಯಲಬುರ್ಗಾ ತಾಲ್ಲೂಕು ಕೊಪ್ಪಳ ಜಿಲ್ಲೆ | ಸದಸ್ಯರು |
| | | ನಿಲೋಫರ್ | ವಕೀಲರು, ಹೆಡ್‌ಪೋಸ್ಟ್ ಆಫೀಸ್ ಹತ್ತಿರ, ವಿ.ಆರ್.ಎಲ್ ಗೋಡಾನ್ ಎದುರಿಗೆ, ಕೊಪ್ಪಳ | ಸದಸ್ಯರು |
| | | ಮಹಾಲಿಂಗಪ್ಪ ದೋಟಿಹಾಳ ಕುಷ್ಟಗಿ | 3ನೇ ವಾರ್ಡ್, ಬಿ.ಬಿ.ನಗರ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ | ಸದಸ್ಯರು |
| 20. | ಮಂಡ್ಯ | ವೆಂಕಟೇಶ್ | ಬಿನ್ ಮಂಚಯ್ಯ # 404, 7ನೇ ಕ್ರಾಸ್, ಗಾಂಧಿನಗರ, ಮಂಡ್ಯ | ಅಧ್ಯಕ್ಷರು |

| | | | | |
|---|---|---|---|---|
| | | ಎಸ್. ಬೃಂದಾ | ವಕೀಲರು, ವೀರಭದ್ರೇಶ್ವರ ನಿಲಯ, ಚಾಮುಂಡೇಶ್ವರಿ ನಗರ, ಮಂಡ್ಯ | ಸದಸ್ಯರು |
| | | ರಾಧಾಕೃಷ್ಣ ಪಿ.ಎಂ. | # 1240/ಎ–1, ಗುರುದೇವ ಕುಟೀರ, 4ನೇ ಕ್ರಾಸ್, ಅಶೋಕನಗರ, ಮಂಡ್ಯ | ಸದಸ್ಯರು |
| | | ಎಸ್. ದಾಕ್ಷಾಯಣಿ | ಕೋಂ ಎಂ.ಆರ್.ಎ. ಪ್ರಕಾಶ್, 3ನೇ ಕ್ರಾಸ್, ವಿ.ವಿ.ನಗರ, ಮಂಡ್ಯ | ಸದಸ್ಯರು |
| | | ಬಿ.ವಿ. ತಿರುಮಲಸ್ವಾಮಿ | # 160, 1ನೇ ಬ್ಲಾಕ್, ಕಿರುಗೋಡು, ಮಂಡ್ಯ ತಾಲ್ಲೂಕು | ಸದಸ್ಯರು |
| 21. | ಮಂಗಳೂರು (ದಕ್ಷಿಣ ಕನ್ನಡ ಜಿಲ್ಲೆ) | ಆಶಾದೀಪ @ ಆಶಾ ನಾಯಕ್ | # 6, ಸುಕ್ರತ್ ಅಪಾರ್ಟ್‌ಮೆಂಟ್ಸ್, ವಿಠೋಭ ದೇವಸ್ಥಾನ ರಸ್ತೆ, ಮಂಗಳೂರು | ಅಧ್ಯಕ್ಷರು |
| | | ಲಾವಣ್ಯ ಎ. ಶೆಟ್ಟಿ | ನವಭಾರತ ವೃತ್ತ ಹತ್ತಿರ, ಪಿ.ವಿ.ಎಸ್. ಕಲಾಕುಂಜ ರಸ್ತೆ, ಕೊಡಿಯಾಲಬೈಲ್, ಮಂಗಳೂರು | ಸದಸ್ಯರು |
| | | ಡಾ: ಸುಫಲಾ ಎಫ್ ಕೊಟ್ಯಾನ್ | "ಕಂಚಿಲ್" ಅಮೀನ್ ಕಾಂಪೌಂಡ್, 1ನೇ ರೈಲ್ವೆ ಬ್ರಿಡ್ಜ್ ಬಳಿ, ಮಾರ್ನಮಿ ಕಟ್ಟೆ, ಮಂಗಳೂರು | ಸದಸ್ಯರು |
| | | ಮಹೇಶ್ ಚಂದ್ರನಾಯಕ್ | "ರಾಮನಾಥ ಕೃಪಾ" ಹ್ಯೊಗೆ ಬೈಲ್, ಅಶೋಕನಗರ, ಮಂಗಳೂರು | ಸದಸ್ಯರು |
| | | ಮಂಜುಳಾ ಎ.ರಾವ್ | ಅನಿಲ್ ನಿಲಯ, ಕಲ್ಪನೆ, ಕುಲಶೇಖರ, ಮಂಗಳೂರು | ಸದಸ್ಯರು |
| 22. | ಮೈಸೂರು | ಎನ್.ಟಿ. ವೆಂಕಟೇಶ್ | ನಂ. 751, 2ನೇ ಕ್ರಾಸ್, ಆಶ್ರಮ ರಸ್ತೆ, ವಿಜಯ ಚಿತ್ರಮಂದಿರ ಹಿಂಭಾಗ, ಹಿನಕಲ್, ಮೈಸೂರು | ಅಧ್ಯಕ್ಷರು |
| | | ಪರಶುರಾಮ ಎಂ.ಎಲ್ | 15/2–ಬಿ, ಎಸ್.ಆರ್.ಎಸ್., ಒಡನಾಡಿ ಸೇವಾ ಸಂಸ್ಥೆ, ಹುಟ್ಟಗಳ್ಳಿ, ಮೈಸೂರು | ಸದಸ್ಯರು |
| | | ಯಶೋದ ಹೆಚ್.ಎಸ್. | 546, 4ನೇ ಮೈನ್, 19ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು | ಸದಸ್ಯರು |
| | | ವಿ. ನಳಿನಿ | ನಂ. 1866, 3ನೇ ಅಡ್ಡರಸ್ತೆ, ಹುಲ್ಲಿನ ಬೀದಿ, ಕೆ.ಆರ್. ಮೊಹಲ್ಲಾ, ಮೈಸೂರು | ಸದಸ್ಯರು |
| | | ಎ.ಎಸ್. ಶ್ರೀನಿವಾಸ ರಾಜೆ ಅರಸ್ | ಎಲ್.ಐ.ಜಿ.–74, 2ನೇ ಹಂತ, ಕೆ.ಹೆಚ್.ಬಿ., ಕುವೆಂಪುನಗರ, ,ಮೈಸೂರು | ಸದಸ್ಯರು |
| 23. | ರಾಯಚೂರು | ವೀಣಾ ಪಲ್ಲಕ್ಕಿ | # 01–03–290/161, ವಿಜಯನಗರ ಕಾಲೋನಿ, ಆಶಾಪೂರು, ರಾಯಚೂರು | ಅಧ್ಯಕ್ಷರು |
| | | ಕಿಶನ್ ರಾವ್ ಆರ್. | # 1–4, 928/79. 1–4, 929/80, ಐ.ಡಿ.ಎಸ್.ಎಂ.ಟಿ. ಲೇಔಟ್, ಎ.ಐ.ಆರ್. ರಸ್ತೆ, ರಾಯಚೂರು | ಸದಸ್ಯರು |
| | | ಗಂಗಮ್ಮ ಎಂ. ಪಾಟೀಲ್ | ಕೋಂ ಎಂ.ಪಾಟೀಲ್, 122, ನಿಜಲಿಂಗಪ್ಪ ಕಾಲೋನಿ, ರಾಯಚೂರು | ಸದಸ್ಯರು |
| 24. | ರಾಮನಗರ | ಸಿ.ವಿ.ಜಾರ್ಜ್ | ಡಾನ್ ಬಾಸ್ಕೋ ಅಜ್ಜನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು (ಗ್ರಾಮಾಂತರ) | ಅಧ್ಯಕ್ಷರು |
| | | ರತ್ನಮ್ಮ ಸಿ. | # 6, ಉತ್ತರ ಬಡಾವಣೆ, ಬಿ.ಎಂ.ರಸ್ತೆ, ಐಜೂರು ಪೊಲೀಸ್ ಠಾಣೆ ಹಿಂಭಾಗ, ರಾ.ಖಾ.ಸ. | ಸದಸ್ಯರು |
| | | ಕೃಷ್ಣಮೂರ್ತಿ ಬಿ. | 6ನೇ ಕ್ರಾಸ್, ಮಾರುತಿನಗರ, ಏರೋಹಳ್ಳಿ, ಕ್ರಾಸ್, ಮಹದೇಶ್ವರ ನಗರ ಮುಖ್ಯ ರಸ್ತೆ, ವಿಶ್ವನೀಡಂ ಅಂಚೆ, ಸುಂಕದ ಕಟ್ಟೆ, ಬೆಂಗಳೂರು (ಪೋಸ್ಟಲ್ ಅಂಚೆ) | ಸದಸ್ಯರು |
| | | ಜಯಪ್ರಕಾಶ್ ಜೆ. | 11/4, ಗೆರಿಗಮ್ಮ ನಿಲಯ, ಅಪ್ಪಯ್ಯಣ್ಣ ಕಲ್ಯಾಣ ಮಂಟಪ ಹತ್ತಿರ, 2ನೇ ಮುಖ್ಯ ರಸ್ತೆ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು–40 | ಸದಸ್ಯರು |
| | | ಶಿವಲಿಂಗಯ್ಯ | # 1170, ಮೇಘ ನಿಲಯ, 3ನೇ ಅಡ್ಡರಸ್ತೆ, ಎಸ್.ಬಿ.ಎಂ. ಹಿಂಭಾಗ, ಕುವೆಂಪುನಗರ, ಚನ್ನಪಟ್ಟಣ ಟೌನ್, ರಾಮನಗರ | ಸದಸ್ಯರು |

| | | | | |
|---|---|---|---|---|
| 25. | ಶಿವಮೊಗ್ಗ | ಆನಂದ ಜಿ. ಪಿಳ್ಳೈ | ಕೆ.ಪಿ.ಸಿ. ವಸತಿ ಗೃಹ, ಸಿ3/2 ಕಾರ್ಗಲ್ ಕಾಲೋನಿ, ಕಾರ್ಗಲ್, ಸಾಗರ ತಾಲ್ಲೂಕು | ಅಧ್ಯಕ್ಷರು |
| | | ಸಂಧ್ಯಾ ಕಾವೇರಿ ಕೆ. | "ಅಕ್ಷಯ", ಬಸವೇಶ್ವರನಗರ, ಶಿವಮೊಗ್ಗ | ಸದಸ್ಯರು |
| | | ಶ್ಯಾಮಲಾ ಶಾಸ್ತ್ರಿ | ಗುರುಕುಲ, ಭಂಡಾರಿ ಗ್ಯಾಸ್, ಗೋಡನ್ ಪಕ್ಕ, ನವುಲೆ, ಶಿವಮೊಗ್ಗ | ಸದಸ್ಯರು |
| | | ಬಿ. ಶಿವಾನಂದಪ್ಪ | ಬಸವೇಶ್ವರನಗರ, 3ನೇ ಕ್ರಾಸ್, ಸುಶೀರ ನಿಲಯ, ಸವಳಂಗ ರಸ್ತೆ, ಶಿವಮೊಗ್ಗ | ಸದಸ್ಯರು |
| | | ಬಿ.ವಿ.ಗೀತಾ ಶಿವಮೂರ್ತಿ | ಗುರು ಸಾಯಿನಿಲಯ, # 1788, 60 ಅಡಿ ರಸ್ತೆ, 2ನೇ ಕ್ರಾಸ್, ವಿನೋಭನಗರ, ಶಿವಮೊಗ್ಗ | ಸದಸ್ಯರು |
| 26. | ತುಮಕೂರು | ಬಿ.ಎಸ್. ನಂದಕುಮಾರ್ | # 155/ಜಿ, 1ನೇ ಕ್ರಾಸ್, ರೇವಣ್ಣ ಸಿದ್ದಪ್ಪ ಬಡಾವಣೆ, ಷಡಕ್ಷರಿ ಮಠದ ಹತ್ತಿರ, ತಿಪಟೂರು | ಅಧ್ಯಕ್ಷರು |
| | | ಈರಣ್ಣ | ಕೆಂಪನದೊಡ್ಡೇರಿ, ಕೆಂಪನದೊಡ್ಡೇರಿ ಅಂಚೆ, ತುಮಕೂರು | ಸದಸ್ಯರು |
| | | ವೀರೇಂದ್ರ ಪ್ರಸಾದ್ | ಬಿನ್ ವೀರಕ್ಯಾತಯ್ಯ, ಗರಗದೊಡ್ಡಿ, ದಾಸರಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ | ಸದಸ್ಯರು |
| | | ಎಸ್.ಸಿ. ರಾಜ್‌ಕುಮಾರ್ | ಸಾಂತ್ವಾನ ಕೇಂದ್ರ, ಎನ್‌ಇಪಿಎಸ್ ಠಾಣೆ ಎದುರು, ಶ್ರೀ ನರ್ಸಿಂಗ್ ಹೋಂ ಮಹಡಿ, ಶಂಕರಪುರಂ, ತುಮಕೂರು | ಸದಸ್ಯರು |
| | | ಮುಜೀಬ್ ಉನ್ನೀಸಾ ಕೆ.ಎಲ್. | ವಕೀಲರು, 2ನೇ ಬ್ಲಾಕ್, 3ನೇ ಮೈನ್ ರೋಡ್, ಕುಮೆಂಪುನಗರ, ತುಮಕೂರು | ಸದಸ್ಯರು |
| 27. | ಉಡುಪಿ | ಜ್ಯೋತಿ ಕೆ. ಶೆಟ್ಟಿ | ಬಪ್ಪುಶೆಟ್ಟಿ ಹೌಸ್, ಪಡುಗ್ರಾಮ ಪೋಸ್ಟ್, ಕಾಪು, ಉಡುಪಿ | ಅಧ್ಯಕ್ಷರು |
| | | ಬಿ.ಕೆ. ನಾರಾಯಣ | "ನಂದಗೋಕುಲ", ಅಲೆವೂರು ರಸ್ತೆ, ಮಣಿಪಾಲ | ಸದಸ್ಯರು |
| | | ಮುರುಳಿಧರ್‌ಶೆಣೈ ಹೆಚ್. | ವಕೀಲರು, ಬಿನ್ ಹೆಚ್. ಮಾಧವ ಶಣೈ, "ಶ್ರೀ ನಾಗೇಶ್ ಮಹಾಲಕ್ಷ್ಮೀ ಕೃಪ", ರಾಮಕೃಷ್ಣ ಭವನದ ಹಿಂಬದಿ, ಚಿಟ್ಪಾಡಿ, ಉಡುಪಿ | ಸದಸ್ಯರು |
| | | ಕೆ.ಜಿ. ಶ್ರೀಪಾದರಾವ್ | ನ್ಯಾಯವಾದಿ, ಬಂಡೀಮಠ, ಹನೆಹಳ್ಳಿ ಅಂಚೆ, ಉಡುಪಿ ತಾಲ್ಲೂಕು | ಸದಸ್ಯರು |
| | | ಬಿ. ನಾಗರಾಜ್ | ರೂಂ ನಂ. 5, ವಾಸುಕೀ ಟವರ್ಸ್, ತಾಲ್ಲೂಕು ಕಛೇರಿ ಸರ್ಕಲ್ ಬಳಿ, ಉಡುಪಿ | ಸದಸ್ಯರು |
| 28. | ಕಾರವಾರ (ಉತ್ತರ ಕನ್ನಡ) | ಫಾದರ್ ಬಸ್ತ್ಯ ಫರ್ನಾಂಡಿಸ್ | ಕೆ.ಡಿ.ಡಿ.ಸಿ., ಸಮಾಜ ಸೇವಾ ಸಂಸ್ಥೆ, ಬಿಷಪ್ಸ್ ಹೌಸ್, ಬೈತಕೊಲ ಅಂಚೆ, ಕಾರವಾರ | ಅಧ್ಯಕ್ಷರು |
| | | ಅನು ಮನೋಹರ್ ಕಳಸ | ನಂ. 634, ಕೆಂಚಾ ರಸ್ತೆ, ಕಾಜುಬಾಗ, ಕಾರವಾರ, ಉತ್ತರ ಕನ್ನಡ | ಸದಸ್ಯರು |
| | | ಸಂತೋಷ ಗಜಾನನ ಹೆಗಡೆ | ಮನೆ ನಂ. 111, ಕೆ.ಹೆಚ್.ಬಿ. ಕಾಲೋನಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ | ಸದಸ್ಯರು |

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಪಿ.ಆರ್. 2787 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಸಮಿತಿಗೆ ಹೆಚ್ಚುವರಿ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 68 ಶಿಸನೇ 2008, ದಿನಾಂಕ : 5–8–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 58 ಶಿಸನೇ 2009, ದಿನಾಂಕ : 23–6–09
3. ಸರ್ಕಾರದ ಆದೇಶ ಸಂಖ್ಯೆ ; ಸಿಆಸುಇ 74 ಶಿಸನೇ 2009, ದಿನಾಂಕ : 27–8–2010.
4. ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇವರ ಟಿಪ್ಪಣಿ ಸಂಖ್ಯೆ : ಅಭಾಸಕ/ಸಕಾ/25/2010, ದಿನಾಂಕ : 13–9–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 5–8–2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಸದರಿ ಸಮಿತಿಗೆ 16 ಜನ ಸದಸ್ಯರನ್ನು ನೇಮಿಸಲಾಗಿತ್ತು.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಈ ಸಮಿತಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶ ದಿನಾಂಕ : 23–6–2009ರಲ್ಲಿ ಪ್ರಸ್ತುತ ಇರುವ ಸದಸ್ಯರುಗಳ ಜೊತೆಗೆ 3 ಜನ ಅನಿವಾಸಿ ಭಾರತೀಯರನ್ನು ಹಾಗೂ 6 ಜನ ಅಧಿಕಾರಿ ಸದಸ್ಯರುಗಳನ್ನು ಹೊಸದಾಗಿ ನೇಮಿಸಲಾಗಿತ್ತು.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಈ ಸಮಿತಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶ ದಿನಾಂಕ : 27–8–2010ರಲ್ಲಿ ಶ್ರೀ ಅರವಿಂದ ಪಾಟೀಲ್ ಇವರನ್ನು ದೋಹ–ಖತಾರ್ ದೇಶದಲ್ಲಿರುವ ಕನ್ನಡಿಗರ ಪರವಾಗಿ ಪ್ರತಿನಿಧಿಸಲು ವಿಶೇಷ ಪ್ರತಿನಿಧಿ–ಭಾರತೀಯ ಸಮಿತಿ, ಕರ್ನಾಟಕ ಎಂಬುದಾಗಿ ನೇಮಿಸಲಾಗಿದೆ.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು, ಈ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಟಿಪ್ಪಣಿ ದಿನಾಂಕ : 13–9–2010ರಲ್ಲಿ ಸಮಿತಿಯ ಸುಗಮ ಕಾರ್ಯಕ್ರಮ ಹಿತದೃಷ್ಠಿಯಿಂದ ಹಾಗೂ ಭಾರತ ಸರ್ಕಾರದ ಸಾಗರೋತ್ತರ ಭಾರತೀಯ ವ್ಯವಹಾರಗಳ ಮಂತ್ರಾಲಯದೊಂದಿಗೆ ಹೊಂದಾಣಿಕೆ ಮಾಡಲು ರಾಜ್ಯದ " ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ" ಅಭಿವೃದ್ಧಿಗೆ ಅನಿವಾಸಿ ಭಾರತೀಯರಿಂದ/ಹಿಂದಿರುಗಿದ ಅನಿವಾಸಿ ಭಾರತೀಯರಿಂದ ನೆರವು ಪಡೆಯುವ ಹಿತದೃಷ್ಠಿಯಿಂದ ಈ ಕೆಳಕಂಡ "ಪದನಾಮದ ಹುದ್ದೆ"ಗಳ ಯಾವುದೇ ಅಧಿಕಾರಿ ಕೆಲಸ ಮಾಡುತ್ತಿರಲಿ ಅವರನ್ನು ಶಾಶ್ವತವಾಗಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಸದಸ್ಯರನ್ನಾಗಿ ನೇಮಿಸಬೇಕೆಂದು ಕೋರಿರುತ್ತಾರೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು–ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
2. ಭಾರತ ಸರ್ಕಾರದ ಜಂಟಿ ಕಾರ್ಯದರ್ಶಿಗಳು (ಫೈನಾನ್ಷಿಯಲ್ ಸರ್ವೀಸಸ್) ಓವರ್‌ಸೀಸ್ ಇಂಡಿಯನ್ ಅಫೇರ್ಸ್ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಅನಿವಾಸಿ ಭಾರತೀಯ ಸಮಿತಿಯ ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ ಮೇಲೆ ಸೂಚಿಸಿದ "ಪದನಾಮದ ಹುದ್ದೆಗಳಲ್ಲಿ" ಯಾವುದೇ ಅಧಿಕಾರಿ ಕೆಲಸ ಮಾಡುತ್ತಿರಲಿ ಅವರುಗಳನ್ನು ಶಾಶ್ವತವಾಗಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರಿನ ಸದಸ್ಯರುಗಳನ್ನಾಗಿ ಸಮಿತಿಯಲ್ಲಿ ಸೇರಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 85 ಶಿಸನೇ 2009, ಬೆಂಗಳೂರು, ದಿನಾಂಕ : 11–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಬೆಂಗಳೂರು, ಈ ಸಮಿತಿಗೆ ಈ ಕೆಳಕಂಡ "ಪದನಾಮದ ಹುದ್ದೆಗಳಲ್ಲಿ" ಯಾವುದೇ ಅಧಿಕಾರಿ ಕೆಲಸ ಮಾಡುತ್ತಿರಲಿ ಅವರುಗಳನ್ನು ಶಾಶ್ವತವಾಗಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು, ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರದ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು–ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
2. ಭಾರತ ಸರ್ಕಾರದ ಜಂಟಿ ಕಾರ್ಯದರ್ಶಿಗಳು (ಫೈನಾನ್ಷಿಯಲ್ ಸರ್ವೀಸಸ್) ಓವರ್‌ಸೀಸ್ ಇಂಡಿಯನ್ ಅಫೇರ್ಸ್ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ರಹಮತ್ ಉಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ ಇಲಾಖೆ (ರಾಜ್ಯ ಶಿಷ್ಟಾಚಾರ)

ಪಿ. ಆರ್. 2803

## ಸಹಕಾರ ಸಚಿವಾಲಯ

**ವಿಷಯ :** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಕಂಇ 101 ಸಸಂನೋ 2010, ದಿನಾಂಕ : 16–9–2010.
2 ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/135/ಎಸ್‌ಓಆರ್/2008–09, ದಿನಾಂಕ : 2–9–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 16–9–2010ರ ಸರ್ಕಾರದ ಆದೇಶದಲ್ಲಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ದಿನಾಂಕ : 19–3–2010 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ದಿನಾಂಕ : 2–9–2010 ರ ಪತ್ರದಲ್ಲಿ, ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಸಹಕಾರ ಸಂಘಗಳ ನಿಬಂಧಕರ ಸೂಚನೆ ಮೇರೆಗೆ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ರವರು ಸಂಘದ ಬೈಲಾ ನಿಯಮಗಳ ರೀತ್ಯ ರೂ. 100/–ಗಳನ್ನು ಪಾವತಿಸಿದ್ದಲ್ಲಿ ಮಾತ್ರ ಆಜೀವ ಸದಸ್ಯರಾಗಲು ಅವಕಾಶವಿದ್ದು, ಹಾಲಿ ಅಂತಹ ಸದಸ್ಯರು ಯಾರು

ಇರುವುದಿಲ್ಲವೆಂದು ಮತ್ತು ಬೈಲಾ ನಿಯಮ–5ರ ಪ್ರಕಾರ ಕಾರ್ಯಕಾರಿ ಮಂಡಳಿಯಲ್ಲಿ 15 ರಿಂದ 20 ಜನ ಸದಸ್ಯರಾಗಲು ಅವಕಾಶವಿರುತ್ತದೆ. ವಾರ್ಷಿಕ ಸದಸ್ಯತ್ವ ಶುಲ್ಕ ರೂ. 25/– ಇದ್ದು, ಸದಸ್ಯತ್ವ ಶುಲ್ಕ ರೂ. 25/–ಗಳನ್ನು ಪಾವತಿಸಿದ್ದವರ ಪೈಕಿ 10 ಜನ ಮಾತ್ರ ಜೀವಂತವಾಗಿರುತ್ತಾರೆ. ಆದರೆ ಇವರುಗಳು ಈ ಹಿಂದಿನ ದಿನಾಂಕ : 15–4–84 ರಿಂದ 24–4–84 ರ ಅವಧಿಯಲ್ಲಿ ಒಂದು ವರ್ಷಕ್ಕೆ ಮಾತ್ರ ಅಂದರೆ 1984 ನೇ ಸಾಲಿಗೆ ಸದಸ್ಯತ್ವ ಶುಲ್ಕ ಪಾವತಿಸಿ, 1985 ರಿಂದ ಈ ತಹಲ್‌ವರೆಗೆ ಸುಮಾರು 26 ವರ್ಷಗಳವರೆಗೆ ಯಾವುದೇ ರೀತಿಯ ಶುಲ್ಕ ಪಾವತಿಸದೇ ಇರುವುದರಿಂದ ಸಂಘದ ಬೈಲಾ ಪ್ರಕಾರ ಸಂಘದ ಸದಸ್ಯರಾಗಿರುವುದಿಲ್ಲ. ಆದ್ದರಿಂದ, ಈ ಬಗ್ಗೆ ಜೀವಂತ ಇರುವ ಸದಸ್ಯರು ಅಭಿಪ್ರಾಯ ಪಡೆಯುವ ಅಗತ್ಯ ಇಲ್ಲವೆಂದು ವರದಿಸುತ್ತಾ, ಸಹಕಾರ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 30(1) ರಡಿಯಲ್ಲಿ ವಿಶೇಷ ಪ್ರಕರಣವೆಂದು ಪರಿಗಣಿಸಿ ಆಡಳಿತಾಧಿಕಾರಿಯವರಿಗೆ ಹೊಸ ಸದಸ್ಯರನ್ನು ಮಾಡಿಕೊಂಡು ಚುನಾವಣೆ ನಡೆಸಲು ಅನುವಾಗುವಂತೆ ಆದೇಶ ನೀಡುವಂತೆ ಕೋರಿರುತ್ತಾರೆ. ಸದರಿಯವರ ಅಭಿಪ್ರಾಯವನ್ನು ಪರಿಗಣಿಸಲು ಶಿಫಾರಸ್ಸಿನೊಂದಿಗೆ ಸರ್ಕಾರದ ಅವಗಾಹನೆ ಮತ್ತು ಸೂಕ್ತ ಕ್ರಮಕ್ಕಾಗಿ ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲಿನ ಹಿನ್ನೆಲೆಯಲ್ಲಿ, ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 23 ಸಸಂನೋ 2010, ಬೆಂಗಳೂರು, ದಿನಾಂಕ : 20–10–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಠಿಯಿಂದ **ಕೊನೆಯದಾಗಿ** ದಿನಾಂಕ : 19–9–2010 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಿ ಸಂಸ್ಥೆಗೆ ಕಲಂ 30(1) ರಡಿಯಲ್ಲಿ ಹೊಸ ಸದಸ್ಯರುಗಳನ್ನು ನೇಮಿಸಿಕೊಂಡು ಚುನಾವಣೆ ನಡೆಸಿ, ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 2804

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 1800.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ/ಮುಅ(ಉ)/ಎಸ್‌ಜಿಇಇ(ಜಿ)/ಉಮುಅ–2/ತಾಸ–1/ಸಅ–3/2010–11/1540, ದಿನಾಂಕ : 28–9–2010.

**ಪ್ರಸ್ತಾವನೆ :**

ಚಿತ್ತಾಪುರ ಪಟ್ಟಣವು ಗುಲ್ಬರ್ಗಾ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 27,006 ಇದ್ದು, ಪ್ರಸ್ತುತ 32,000 ಇರುತ್ತದೆ. ಚಿತ್ತಾಪುರ ಪಟ್ಟಣಕ್ಕೆ **ಕಾಗಿನ** ನದಿ ಮೂಲದಿಂದ ನೀರು ಸರಬರಾಜು ವ್ಯವಸ್ಥೆಯನ್ನು ಒದಗಿಸಿ 1995 ರಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯನ್ನು ಸುಧಾರಿಸಲು ರೂ. 706.60 ಲಕ್ಷಗಳ ವೆಚ್ಚದಲ್ಲಿ ಯೋಜನೆಯ ಮಧ್ಯಂತರ ಅವಧಿ 2016ಕ್ಕೆ ಅಂದಾಜಿಸಲಾದ 39,000 ಮತ್ತು ಅಂತಿಮ ಅವಧಿ 2031 ಕ್ಕೆ ಅಂದಾಜಿಸಲಾದ 51,000 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲು ಯೋಜಿಸಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಹಾಗೂ ಕಾಮಗಾರಿಗಳು ಮುಗಿಯುವ ಹಂತದಲ್ಲಿದ್ದು, 3/2011 ರ ಅಂತ್ಯಕ್ಕೆ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.

ಚಿತ್ತಾಪುರ ಪಟ್ಟಣದಲ್ಲಿ ಸಧ್ಯಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಗಳಲ್ಲಿ ಆಳಗುಂಡಿಗಳ ಮತ್ತು ಇಂಗು ತೊಟ್ಟಿಗಳ ವ್ಯವಸ್ಥೆಯನ್ನು ಹೊಂದಿದ್ದು, ಇದರ ತ್ಯಾಜ್ಯ ನೀರನ್ನು ತೆರೆದ ಚರಂಡಿಗಳಿಗೆ ಬಿಡುತ್ತಿರುವುದರಿಂದ, ನಾಗರೀಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿದ್ದು ಅಂತರ ಜಲ ಕಲ್ಮಶ ಉಂಟುಮಾಡುತ್ತಿದೆ, ಈ ಪರಿಸ್ಥಿತಿಯನ್ನು ನೀಗಿಸಲು ಪಟ್ಟಣದಲ್ಲಿ ಒಳಚರಂಡಿ ಯೋಜನೆಯನ್ನು 2030ರ ಮಧ್ಯಂತರ ಅವಧಿಗೆ ನಿರೀಕ್ಷಿಸಲಾದ 48,157 ಹಾಗು 2045ರ ಅಂತಿಮ ಅವಧಿಗೆ ನಿರೀಕ್ಷಿಸಲಾದ 60,411 ಜನಸಂಖ್ಯೆಗೆ ಅಂದಾಜಿಸಿದ ಗ್ರಾಮಸಾರವನ್ನು ಪರಿಗಣಿಸಿ, ಒಳಚರಂಡಿ ಯೋಜನೆಯನ್ನು ವಿನ್ಯಾಸಿಸಲಾಗಿದೆ.

ಸದರಿ ಯೋಜನೆಯ ಅಂದಾಜು ಪ್ರತಿಯನ್ನು 2010–11ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಆಧರಿಸಿ ರೂ. 1800–00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಸಾಲ (30%) | ರೂ. 540.00 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (50%) | ರೂ. 900.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (20%) | ರೂ. 360.00 ಲಕ್ಷಗಳು |
| ಒಟ್ಟು | ರೂ. 1800.00 ಲಕ್ಷಗಳು |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಿಎಸ್ 2010, ಬೆಂಗಳೂರು, ದಿನಾಂಕ : 9–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 1800.00 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಎಂಟುನೂರು ಲಕ್ಷಗಳಲ್ಲಿ ಮಾತ್ರ) ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **"ಒಳಚರಂಡಿ ಯೋಜನೆಯಡಿ"** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. Increment cost due to increase in prices or delay of project to be borne by the ULB concerned:
2. ETP, charges should be restricted to 10% on estimate only without taking tender premium into consideration for calculating ETP charges.

3. Provisions of KTPP Act/Rules to be followed in timely completion of project.
4. Water rates as proposed by KUWS & DB has to be implemented to meet O & M cost.
5. Escalation cost will not be borne by the Government.
6. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.
7. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 679 Exp-9 : 2009, ದಿನಾಂಕ : 1–10–2010. ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ. ಆರ್. 2805

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹಡಗಲಿ ಪಟ್ಟಣಕ್ಕೆ ತುಂಗಭದ್ರಾ ನದಿಯ ಮೂಲದಿಂದ 2ನೇ ಹಂತದ ನೀರು ಸರಬರಾಜು ಯೋಜನೆಯನ್ನು ಅಂದಾಜು ರೂ. 1994.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ರವರ ಪತ್ರ ಸಂಖ್ಯೆ : ಕಜಮಂ:ಮುಅ(ಉ)/ಎಸ್‌ಜಿಇಇ(ಜಿ)/ಉಮುಅ(2)/ತಾಸ1/ಸ.ಅ–1/1973/2010–11, ದಿನಾಂಕ : 1–10–2010

**ಪ್ರಸ್ತಾವನೆ :**

ಹಡಗಲಿ ಪಟ್ಟಣವು ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಈ ಪಟ್ಟಣದ ಜನಸಂಖ್ಯೆಯು 23,404 ಇದ್ದು, ಹಾಲಿ 28,000 ಇರುತ್ತದೆ. ಹಾಲಿ ಈ ನಗರಕ್ಕೆ ತುಂಗಭದ್ರಾ ನದಿ ಮೂಲದಿಂದ ನೀರು ಸರಬರಾಜು ಯೋಜನೆಯನ್ನು ಕೈಗೆತ್ತಿಕೊಂಡು 2000 ಇಸವಿಯಲ್ಲಿ ಅನುಷ್ಠಾನಗೊಳಿಸಲಾಯಿತು. ಈ ಯೋಜನೆಯನ್ನು 2021ರಲ್ಲಿ ನಿರೀಕ್ಷಿಸಿದ 36,000 ಜನಸಂಖ್ಯೆಗೆ ತಲಾ ದಿನಂಪ್ರತಿ 110 ಲೀಟರ್ ನೀರು ಪೂರೈಕೆ ಮಾಡುವಂತೆ ಯೋಜಿಸಲಾಗಿತ್ತು. ತುಂಗಭದ್ರಾ ನದಿ ಬೇಸಿಗೆ ದಿನಗಳಲ್ಲಿ ನದಿಯಲ್ಲಿನ ಹರಿವು ಕಡಿಮೆಯಾಗಿ ಕ್ರಮೇಣವಾಗಿ ಬತ್ತಿಹೋಗುತ್ತಿದ್ದು, ಬೇಸಿಗೆಯಲ್ಲಿ ನೀರು ಸರಬರಾಜು ಮಾಡಲು ಸಾಧ್ಯವಾಗದ ಕಾರಣ ಪ್ರಸ್ತುತ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿಲ್ಲ. ಈ ಯೋಜನೆಯಡಿಯಲ್ಲಿ ನಿರ್ಮಿಸಿದ್ದ ಕೇಂದ್ರ ಸ್ಥಾವರವು ತುಂಗಭದ್ರಾ ಅಣೆಕಟ್ಟಿನ ಹಿನ್ನೀರಿನ ಬಳಿ ನಿರ್ಮಿಸಿರುವುದರಿಂದ, ಅಣೆಕಟ್ಟು ತುಂಬಿದಾಗ ಮತ್ತು ನೀರಿನ ಅಲೆಯಿಂದ ಮೂಲ ಸ್ಥಾವರವು ಕೆಲವು ದಿನಗಳು ನೀರಿನಲ್ಲಿ ಮುಳುಗಿ ಹೋಗುವುದರಿಂದ ಪಟ್ಟಣಕ್ಕೆ ನೀರು ಸರಬರಾಜು ಮಾಡಲು ಸಾಧ್ಯವಾಗುವುದಿಲ್ಲ.

ಹಡಗಲಿ ಪಟ್ಟಣಕ್ಕೆ ರೂ. 1120.00 ಲಕ್ಷಗಳ ಒಳಚರಂಡಿ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ. ಒಳಚರಂಡಿ ಯೋಜನೆಯು ಸಮರ್ಪಕವಾಗಿ ನಡೆಯಲು ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರನ್ನು ಸರಬರಾಜು ಮಾಡಬೇಕಾಗಿರುತ್ತದೆ. ಆದ್ದರಿಂದ 2ನೇ ಹಂತದ ನೀರು ಸರಬರಾಜು ಯೋಜನೆಯನ್ನು ಹಡಗಲಿ ಪಟ್ಟಣಕ್ಕೆ, ತುಂಗಭದ್ರಾ ನದಿಯ ರಜವಾಲ್ ಹತ್ತಿರವಿರುವ ಬ್ಯಾರೇಜ್ ನಿಂದ ನೀರು ಸರಬರಾಜು ಮಾಡಲು ಉದ್ದೇಶಿಸಿ ಯೋಜನೆಯನ್ನು ರೂಪಿಸಲಾಗಿದೆ.

ಸದರಿ ಯೋಜನೆಯನ್ನು ಮಂಡಳಿ ಹಾಗೂ ಲೋಕೋಪಯೋಗಿ ಇಲಾಖೆಯ 2010–11ನೇ ಸಾಲಿನ ದರಪಟ್ಟಿಯನ್ವಯ ಅಂದಾಜು ರೂ. 6150.00 ಲಕ್ಷಗಳಿಗೆ ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಆಡಳಿತಾತ್ಮಕ ಅನುಮೋದನೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 17 ಯುಡಬ್ಲ್ಯೂಎಸ್ 2010, ಬೆಂಗಳೂರು, ದಿನಾಂಕ : 9–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಡಗಲಿ ಪಟ್ಟಣಕ್ಕೆ ತುಂಗಭದ್ರಾ ನದಿಯ ಮೂಲದಿಂದ 2ನೇ ಹಂತದ ನೀರು ಸರಬರಾಜು ಯೋಜನೆಯನ್ನು ಅಂದಾಜು ರೂ. 1994.00 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಒಂಭೈನೂರ ತೊಂಬತ್ತಾ ನಾಲ್ಕು ಲಕ್ಷಗಳು ಮಾತ್ರ) ನಗರ ನೀರು ಸರಬರಾಜು ಯೋಜನೆಯಡಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಈ ಕೆಳಕಂಡ ಷರತ್ತುಗಳನ್ವಯ ಕೈಗೆತ್ತಿಕೊಳ್ಳಲು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(i) Permission of Water Resources Department to be sought beforehand for drawing additional water ;
(ii) ETP, charges/Contingencies to be restricted to 10% of the basic cost of the Project.
(iii) No escalation and tender premium charges would be allowed. This need to be borne by the ULB itself ;
(iv) Water Rates as proposed by KUWS&DB., have to be implemented to meet the O & M cost.
(v) KTPP provisions, quality control and timely completion should be ensured.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ : 695 ಇಎಕ್ಸ್‌ಪಿ–9: 2010, (ಆರ್‌ಎಫ್–45206) ದಿನಾಂಕ : 1–10–2010. ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ. ಆರ್. 2806